<u>ಕರ್ನಾಟಕ ವಿಧಾನ ಪರಿಷತ್ತು</u>

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :779
2. ವಿಧಾನ ಪರಿಷತ್ತಿನ ಸದಸ್ಯರ ಹೆಸರು :ಶ್ರೀ.ಎಸ್.ನಾಗರಾಜ್ (ಸಂದೇಶ್ ನಾಗರಾಜ್ (ಸ್ಥಳೀಯ ಸಂಸ್ಥೆಗಳ)
3. ಉತ್ತರಿಸಬೇಕಾದ ಸಚಿವರು : ತೋಟಗಾರಿಕೆ ಹಾಗೂ ಯೋಜನೆ ಕಾರ್ಯಕ್ರಮ, ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು
4. ಉತ್ತರಿಸಬೇಕಾದ ದಿನಾಂಕ :17.09.2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಜಿಲ್ಲೆಗೆ ನಂಜನಗೂಡು ರಸಬಾಳೆಯನ್ನು ಬ್ರ್ಯಾಂಡ್ ಉತ್ಪನ್ನವಾಗಿ ಗುರುತಿಸಲಾಗಿದೆಯೇ; ಈಗ ಎಷ್ಟು ಎಕರೆ ಪ್ರದೇಶದಲ್ಲಿ ನಂಜನಗೂಡು ರಸಬಾಳೆ ಬೆಳೆಯಲಾಗುತ್ತಿದೆ; ಈ ಬೆಳೆಯನ್ನು ಬೆಳೆಯುತ್ತಿರುವ ರೈತರ ಸಂಖ್ಯೆ ಎಷ್ಟು; ಉತ್ಪನ್ನದ ಅಂದಾಜು ಪ್ರಮಾಣ ಎಷ್ಟು; | ಮೈಸೂರು ಜಿಲ್ಲೆಗೆ ನಂಜನಗೂಡು ರಸಬಾಳೆಯನ್ನು ಭೌಗೋಳಿಕ ತಳಿ (Geographical Indication) ಬ್ರ್ಯಾಂಡ್ ಉತ್ಪನ್ನವಾಗಿ ಗುರುತಿಸಲಾಗಿದೆ.<br>ಈಗ 12.5 ಎಕರೆ ಪ್ರದೇಶದಲ್ಲಿ ನಂಜನಗೂಡು ರಸಬಾಳೆ ಬೆಳೆಯಲಾಗುತ್ತಿದೆ.<br>ಈ ಬೆಳೆಯನ್ನು ಬೆಳೆಯುತ್ತಿರುವ ರೈತರ ಸಂಖ್ಯೆ 18.<br>ನಂಜನಗೂಡು ರಸಬಾಳೆಯ ಉತ್ಪನ್ನದ ಅಂದಾಜು ಪ್ರಮಾಣ 82 ಟನ್. |
| ಆ) | ನಂಜನಗೂಡು ರಸಬಾಳೆ ಬೆಳೆಯುವ ರೈತರ ಸಂಖ್ಯೆ ಹಾಗೂ ಉತ್ಪಾದನಾ ಪ್ರಮಾಣವನ್ನು ಹೆಚ್ಚಿಸಲು ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) ಈ ಬಾಳೆ ಹಣ್ಣನ್ನು ದೇಶದ ಇತರ ಭಾಗಗಳಿಗೆ ಮತ್ತು ವಿದೇಶಗಳಿಗೆ ರಫ್ತು ಮಾಡುವ ಬಗ್ಗೆ ಯೋಜನೆ ಇದೆಯೇ; | ನಂಜನಗೂಡು ರಸಬಾಳೆ ಬೆಳೆಯುವ ರೈತರ ಸಂಖ್ಯೆ ಹಾಗೂ ಉತ್ಪಾದನಾ ಪ್ರಮಾಣವನ್ನು ಹೆಚ್ಚಿಸಲು ಕೈಗೊಂಡಿರುವ ಕ್ರಮಗಳು ಈ ಕೆಳಕಂಡಂತಿದೆ.<br>• 2017-18 ರಿಂದ 2019-20ನೇ ಸಾಲಿನ ವರೆಗೆ ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಯಡಿ (ಸಿ.ಹೆಚ್.ಡಿ) ಕಂದು ನಂಜನಗೂಡು ರಸಬಾಳೆ ಬೇಸಾಯಕ್ಕಾಗಿ ಪ್ರತಿ ಎಕರೆಗೆ ರೂ. 40754/- ಸಹಾಯಧನವನ್ನು ನೀಡಿ ಪ್ರೋತ್ಸಾಹಿಸಲಾಗಿದೆ.<br>• ನಂಜನಗೂಡು ರಸಬಾಳೆ ಅಂಗಾಂಶ ಕೃಷಿ ಬಾಳೆ ಸೇರಿದಂತೆ ಎಲ್ಲಾ ಅಂಗಾಂಶ ಕೃಷಿ ಬಾಳೆ ತಳಿಗಳಿಗೆ ಎಂ.ಜಿ.ಎನ್.ಆರ್.ಇ.ಜಿ.ಎ. (ನರೇಗ) ಯೋಜನೆಯಡಿ ಪ್ರತಿ ಎಕರೆಗೆ ರೂ.96456/-ಗಳ ಸಹಾಯಧನ ನೀಡುವ ಮೂಲಕ ಪ್ರೋತ್ಸಾಹಿಸಲಾಗುತ್ತಿದೆ.<br>• ಇಲಾಖಾ ವತಿಯಿಂದ ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆಯಡಿ ನಂಜನಗೂಡು ರಸ ಬಾಳೆ ಸೇರಿದಂತೆ ಎಲ್ಲಾ ಬಾಳೆ ತಳಿ ಬೆಳೆಗಾರರಿಗೆ ಹನಿ ನೀರಾವರಿ ಪದ್ಧತಿ |

| | | |
|---|---|---|
| | | ಅಳವಡಿಸಲು SF/ SC/ST ರೈತರಿಗೆ 2 ಹೆಕ್ಟೇರ್ ವರೆಗೆ ಶೇಕಡ 90 ರಂತೆ ಸಹಾಯಧನ ನೀಡಲಾಗುತ್ತಿದೆ. |
| | | ನಂಜನಗೂಡು ರಸಬಾಳೆಗೆ ನಂಜನಗೂಡು ತಾಲ್ಲೂಕಿನಲ್ಲಿ ಸ್ಥಳೀಯವಾಗಿ ಹಾಗೂ ಮೈಸೂರು ಜಿಲ್ಲೆಯ ಮಾರುಕಟ್ಟೆಯಲ್ಲಿ ಉತ್ತಮ ಬೇಡಿಕೆ ಇರುತ್ತದೆ. ಜಿಲ್ಲಾ ಹಾಪ್‌ಕಾಮ್ಸ್ ಮುಖೇನ ಸಹ ಮಾರಾಟ ಮಾಡಲಾಗುತ್ತಿದೆ.<br>ಈ ನಂಜನಗೂಡು ರಸಬಾಳೆ ಹಣ್ಣನ್ನು ದೇಶದ ಇತರೆ ಭಾಗಗಳಿಗೆ ಮತ್ತು ವಿದೇಶಗಳಿಗೆ ರಫ್ತು ಮಾಡುವ ಬಗ್ಗೆ ಉತ್ಪಾದನೆಯನ್ನು ಹೆಚ್ಚಿಸಿ ಕ್ರಮ ಕೈಗೊಳ್ಳಲಾಗುವುದು. |
| ಇ) | ಮೈಸೂರು ವೀಳ್ಯದ ಎಲೆಯನ್ನು (ಚಿಗರೆಲೆ) ಕೂಡಾ, ಗುರುತಿಸಿ, ಅಭಿವೃದ್ಧಿ ಪಡಿಸಿ, ಮೈಸೂರು ಜಿಲ್ಲೆಯ ಬ್ರ್ಯಾಂಡ್ ಉತ್ಪನ್ನವೆಂದು ಪರಿಗಣಿಸಲು ಕ್ರಮ ತೆಗೆದುಕೊಳ್ಳಲಾಗುವುದೇ; ಈಗ ಮೈಸೂರು ಚಿಗುರೆಲೆ ಎಂದು ಅಂಬಾಡಿ ವೀಳ್ಯದೆಲೆಯನ್ನು ಮಾರಾಟ ಮಾಡುವುದು ಗಮನಕ್ಕೆ ಸರ್ಕಾರದ ಗಮನಕ್ಕೆ ಬಂದಿದೆಯೇ: | ಮೈಸೂರು ವೀಳ್ಯದ ಎಲೆಯನ್ನು (ಚಿಗರೆಲೆ) ಕೂಡಾ ಭೌಗೋಳಿಕ ತಳಿ (Geographical Indication) ಎಂದು ಗುರುತಿಸಿ ಮೈಸೂರು ಜಿಲ್ಲೆಯ ಬ್ರ್ಯಾಂಡ್ ಉತ್ಪನ್ನವೆಂದು ಪರಿಗಣಿಸಲಾಗಿದೆ.<br>ಮೈಸೂರು ಚಿಗುರೆಲೆ ಎಂದು ಅಂಬಾಡಿ ವೀಳ್ಯದೆಲೆಯನ್ನು ಮಾರಾಟ ಮಾಡುವುದು ಗಮನಕ್ಕೆ ಬಂದಿರುವುದಿಲ್ಲ. |

**No.HORTI 366 HGM 2021**

(ಮುನಿರತ್ನ)
**ತೋಟಗಾರಿಕೆ ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.**